ಬಿ. ರಾಜಶೇಖರಪ್ಪ

# ಮಾದರಸ ದಣ್ಣಾಯಕನ ಕಾಟಿಹಳ್ಳಿಯ ಶಾಸನ

ಚಿತ್ರದುರ್ಗ ಜಿಲ್ಲೆಯ ಹೊಸ ಶಾಸನಗಳನ್ನು ಕುರಿತ ನನ್ನ ಅನ್ವೇಷಣೆಯಲ್ಲಿ ಈಚೆಗೆ ಕಂಡುಬಂದ ಒಂದು ಮುಖ್ಯ ಶಾಸನ ಇದು. ಚಿತ್ರದುರ್ಗ ಜಿಲ್ಲಾ ಕಸಬಾ ತಾಲ್ಲೂಕು ಮತ್ತು ಕಸಬಾ ಹೋಬಳಿ ಕಾಟಿಹಳ್ಳಿ ಗ್ರಾಮಕ್ಕೆ ಸೇರಿದ ಹೊಲವೊಂದರಲ್ಲಿರುವ ಶಾಸನ ಇದು. ಸುಮಾರು ನಾಲ್ಕು ಅಡಿ ಎತ್ತರ, ಒಂದೂವರೆ ಅಡಿ ಅಗಲ, ಒಂದೂಕಾಲು ಅಡಿ ದಪ್ಪ ಇರುವ ಬಿಳಿಯ ಗ್ರಾನೈಟ್ ಕಲ್ಲಿನಲ್ಲಿ, ಇದರ ಉರುಟು ಮೇಲ್ಮೈಯಲ್ಲಿ ಮೇಲೆ ಸೂರ್ಯ ಚಂದ್ರ ಶಿವಲಿಂಗಗಳ ರೇಖಾ ಕೆತ್ತನೆ ಹಾಗೂ ಕನ್ನಡ ಲಿಪಿ ಮತ್ತು ಭಾಷೆಯಲ್ಲಿರುವ ೨೫ ಪಂಕ್ತಿಗಳ ಈ ಶಾಸನವು, ಲಿಪಿಲಕ್ಷಣದಿಂದ ಕ್ರಿ. ಶ. ಸುಮಾರು ೧೪ನೆಯ ಶತಮಾನದ ಅಂತ್ಯಕಾಲಕ್ಕೆ ಸೇರಿದ್ದಾಗಿ ಕಾಣುತ್ತದೆ. ಈ ಅವಧಿಯಲ್ಲಿ ಚಿಮ್ಮತ್ತನ ಕಲ್ಲನ್ನು, ಅಂದರೆ ಹಿಂದಿನ ಚಿತ್ರದುರ್ಗವನ್ನು, ಮಾದರಸ ದಣ್ಣಾಯಕ ಎಂಬ ಪ್ರಭುವೊಬ್ಬ ಆಳುತ್ತಿದ್ದ ಎನ್ನುವ ಅಪೂರ್ವ ಸಂಗತಿ ಈ ಶಾಸನದಿಂದ ಇದೇ ಮೊದಲಿಗೆ ಬೆಳಕಿಗೆ ಬರುತ್ತಿದೆ. ಸಾಕಷ್ಟು ಕಾಗುಣಿತದೋಷಗಳು ಈ ಶಾಸನ ಬರಹದಲ್ಲಿವೆ.

ಮಾದರಸ ದಣ್ಣಾಯಕನು ಅರವಟ್ಟಿಗೆಯೊಂದಕ್ಕೆ ಒಂದು ಭೂಮಿಯನ್ನು ದಾನವಾಗಿ ಇತ್ತನೆಂಬುದು ಈ ಶಾಸನದ ವಿಷಯ. ಸಿದ್ಧಾಪುರ ಹಡವನಹಳ್ಳಿ ರಾಜ್ಯದಲ್ಲಿ ಉಭಯ ನಾನಾ ದೇಶಿ ಸಮಸ್ತರು ಹಲವರು ಓಡಾಡುತ್ತಿದ್ದ ಮಾರ್ಗದಲ್ಲಿ ಇದ್ದ ಆ ಅರವಟ್ಟಿಗೆಯಲ್ಲಿ ಅಂಬಕಳವನ್ನು (=ಮಜ್ಜಿಗೆ ಅಂಬಲಿ, ಹುಳಿ ಅಂಬಲಿ) ಮತ್ತು ಸಿದೌಷಧಿಗಳನ್ನು ಸಹಾ ಶಿವಾರ್ಥವಾಗಿ ಎಂದು ನೀಡಲಾಗುತ್ತಿತ್ತು. ಇಲ್ಲಿ ಅರವಟ್ಟಿಗೆಯಲ್ಲಿ ಸಿದೌಷಧಿಗಳನ್ನು ಸಹಾ ಉಚಿತವಾಗಿ ನೀಡುತ್ತಿದ್ದರು ಎನ್ನುವುದು ಸಾಂಸ್ಕೃತಿಕ ಸಾಮಾಜಿಕ ಇತಿಹಾಸದ ದೃಷ್ಟಿಯಿಂದ ಒಂದು ಗಣನೀಯವೆನಿಸುವ ಸಂಗತಿ. ಏಕೆಂದರೆ ಬಳಲಿದ ಪ್ರಯಾಣಿಕರಿಗೆ ಮತ್ತು ಪಶುಪ್ರಾಣಿಗಳಿಗೆ ಅರವಟ್ಟಿಗೆಗಳಲ್ಲಿ ನೀರನ್ನು ನೀಡುತ್ತಿದ್ದರೆಂಬುದು ಸಾಮಾನ್ಯ ಸಂಗತಿ. ಅಂಥವುಗಳಲ್ಲೂ ಕೆಲವೆಡೆ ಮಜ್ಜಿಗೆ, ಪಾನಕ, ಎಳನೀರು, ಕಬ್ಬಿನಹಾಲು ಇಂಥವನ್ನು ಸಹಾ ನೀಡಲಾಗುತ್ತಿತ್ತು. ಹಾಗೇ ಅನ್ನದಾನ ಛತ್ರ ಅಥವಾ ಸತ್ರಗಳಲ್ಲಿ ಹಸಿದು ಬಂದ ಪ್ರಯಾಣಿಕರಿಗೆ ಊಟವನ್ನು ಸಹಾ ನೀಡುತ್ತಿದ್ದುದುಂಟು. ಇಲ್ಲಿಯ ಅರವಟ್ಟಿಗೆಯಲ್ಲಿ ಅಂಬಕಳ ನೀಡುವುದರ ಜತೆಗೆ ಔಷಧಿಗಳನ್ನೂ ನೀಡುತ್ತಿದ್ದರೆನ್ನುವುದು ಒಂದು ಗಣನೀಯವಾದ ಅಂಶವಾಗಿ ಕಾಣುತ್ತದೆ. ಈ ಒಂದು ಸಂಗತಿ ಬಳ್ಳಿಗಾವೆಯ ಕೋಡಿಯ ಮಠವನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತದೆ. ಬಹುಸಂಖ್ಯೆಯ ಜನರು ಓಡಾಡುತ್ತಿದ್ದ ಮಾರ್ಗದ, ಬಹುಶಃ ಹೆದ್ದಾರಿಯ, ಅರವಟ್ಟಿಗೆಯಲ್ಲಿ ಈ ಧರ್ಮಕಾರ್ಯ ನಡೆಯುತ್ತಿತ್ತು ಎನ್ನುವುದು ಇನ್ನಷ್ಟು ಗಮನಾರ್ಹ ಅಂಶ ಎನಿಸುತ್ತದೆ.

ಅರವಟ್ಟಿಗೆಯ ಈ ಧರ್ಮಕಾರ್ಯಕ್ಕೆ ಬಹುಶಃ ಕಾರಣಕರ್ತರು, ಶ್ರೀಶೈಲಮಲ್ಲಿಕಾರ್ಜುನದೇವರ ಪಾದಪದ್ಮಾರಾಧಕರಾಗಿದ್ದ 'ಪರಿಣಾಮಿ ದೇವಯ್ಯ' ಎಂಬುವರು. ಇಲ್ಲಿಯ 'ಪರಿಣಾಮಿ' ಎಂಬ ವಿಶೇಷಣದಿಂದ, ಅವರು ಬಹುತೇಕ ಒಬ್ಬ ವೀರಶೈವ ಶರಣಮಾರ್ಗದಲ್ಲಿ ನಡೆಯುತ್ತಿದ್ದ ಒಬ್ಬ ಗುರು ಎಂದು ತೋರುತ್ತದೆ.

ಕ್ರಿ.ಶ.ಸು. ೧೪ನೆಯ ಶತಮಾನದ ಅಂತ್ಯದಲ್ಲಿ ಭೀಮ ಕವಿಯಿಂದ ರಚಿತವಾದ 'ಕನ್ನಡ ಬಸವಪುರಾಣ'ದಲ್ಲಿ, ಬಸವಣ್ಣನವರು ವಿಷವನ್ನು ಅಮೃತವಾಗಿ ಮಾಡಿದ ಪವಾಡಕಥೆಯಲ್ಲಿ, ಅಲ್ಲಿ ನೆರೆದಿದ್ದ ಬಹುಸಂಖ್ಯೆಯ ಶರಣ ಸಮೂಹದಲ್ಲಿ 'ಪರಿಣಾಮಿ ದೇವಯ್ಯ' ಎಂಬು ವನೊಬ್ಬನನ್ನು ಹೆಸರಿಸಿದ್ದಾನೆ. ಆದರೆ ಈ ಹೆಸರು ಕನ್ನಡ ಬಸವಪುರಾಣಕ್ಕೆ ಮೂಲವಾದ ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣಮು'ಕೃತಿಯಲ್ಲಿ, ಇದೇ ಪವಾಡದ ಕಥೆಯ ಸಂದರ್ಭದಲ್ಲಿ (ಮತ್ತು ಇನ್ನಾವುದೇ ಸಂದರ್ಭದಲ್ಲಿ) ಕಾಣಿಸುವುದಿಲ್ಲ. ಇದರಿಂದ ಭೀಮಕವಿ ತನ್ನ ಸಮಕಾಲೀನನಾದ ಒಬ್ಬ ಶರಣಗುರುವಿನ ಹೆಸರನ್ನು, ತನ್ನ ಕೃತಿಯಲ್ಲಿ ಅಭಿಮಾನದಿಂದಾಗಿ ಸೇರಿಸಿಕೊಂಡಿರಬಹುದೆ ?—ಎಂಬ ಪ್ರಶ್ನೆಯೊಂದು ಮೂಡಿನಿಲ್ಲುತ್ತದೆ.

ಅರವಟ್ಟಿಗೆ ವಾಸ್ತವವಾಗಿ ಇದ್ದ ಸ್ಥಳವನ್ನು ಶಾಸನದಲ್ಲಿ ಸೂಚಿಸಿಲ್ಲ. ಆದರೆ ಅದು ಇದ್ದುದು ಸಿದ್ಧಾಪುರ ಹಡವನಹಳ್ಳಿ ರಾಜ್ಯದಲ್ಲಿ ಉಭಯ ನಾನಾ ಕೇಶಿಗಳು ಸಮಸ್ತರು ನಡೆವ ಮಾರ್ಗದಲ್ಲಿ ಎಂಬ ಮಾತು ಬಂದಿರುವುದು ವಿಚಾರಣೀಯ. ಇಲ್ಲಿ ಬರುವ ಸಿದ್ಧಾಪುರ, ಕಾಟಿಹಳ್ಳಿಯ ಪೂರ್ವಕ್ಕೆ ಸಮೀಪದಲ್ಲಿ ಈಗಲೂ ಇರುವ ಊರು. ಪ್ರಾಚೀನದಿಂದಲೂ ಇರುವ ಒಂದು ಗ್ರಾಮ ಇದು. ಪ್ರಾಚೀನ ಶಾಸನಗಳಲ್ಲಿ ಇದನ್ನು 'ಸಿದ್ಧಪುರ' ಎಂದೂ ಕರೆದಿರುವುದುಂಟು. ಆದರೆ ಪ್ರಸ್ತುತ ಶಾಸನದಲ್ಲಿ 'ಸಿದ್ಧಾಪುರ' ಎಂದು ಮಾತ್ರ ಕರೆಯಲಾಗಿದೆ. ಈಗ ಇರುವ ಹೆಸರಿನ ರೂಪವೂ ಅದೇ. ಇನ್ನು ಹಡವನಹಳ್ಳಿ ಎನ್ನುವ ಊರು ಯಾವುದು ಎನ್ನುವುದು ಸದ್ಯಕ್ಕೆ ಇನ್ನೂ ಸ್ಪಷ್ಟವಾಗುವಂತಿಲ್ಲ. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ 'ಹಡವನಹಾಳು' ಎಂದು ಕರೆಯಲಾಗುತ್ತಿದ್ದ ಗ್ರಾಮ ಬಹುಶಃ ಆ ಹಡವನಹಳ್ಳಿಯೇ ಇರಬಹುದು. ಆದರೆ ಈ ಊರು ಇಂಥದೇ ಇಲ್ಲಿಯದೇ ಎಂದು ನಿರ್ಧಾರ ಮಾಡುವುದು ಸದ್ಯಕ್ಕೆ ಇನ್ನೂ ಸಾಧ್ಯವಾಗುವಂತಿಲ್ಲ. ಇದು ಸಾಧ್ಯವಾದರೆ ಪ್ರಾಚೀನ ಕಾಲದ ಹೆದ್ದಾರಿಯೊಂದನ್ನು ಗುರುತಿಸಲು ಸಾಧ್ಯವಾಗಬಹುದು. ಸಿದ್ಧಾಪುರ ಹಡವನಹಳ್ಳಿ ಈ ಎರಡೂ ಈ ಶಾಸನದ ಕಾಲಕ್ಕೆ ಸಾಕಷ್ಟು ದೊಡ್ಡ ಊರುಗಳಾಗಿ ಹೆಸರಾಗಿದ್ದುವೆಂದೂ ಉಭಯನಾನಾದೇಶಿಗಳಂಥ ವರ್ತಕ ಶ್ರೇಣಿಯವರೂ ಇತರ ಅನೇಕರೂ ಬಂದು ಹೋಗುತ್ತಿದ್ದಂಥ ಪ್ರಮುಖ ಸ್ಥಳಗಳಾಗಿದ್ದಿರಬೇಕೆಂದೂ ತಿಳಿಯಬಹುದು.

ಚಿಮ್ಮತ್ತನಕಲ್ಲನ್ನು ಆಳುತ್ತಿದ್ದ 'ಮಾದರಸ ದಣ್ಣಾಯಕ' ಯಾರು ?–ಎಂಬ ಅಂಶವೂ ವಿಚಾರಣೀಯವಾದದ್ದು. ಮಾದರಸ ದಣ್ಣಾಯಕನು ಚಿಮ್ಮತ್ತನಕಲ್ಲನ್ನು ಆಳುತ್ತಿದ್ದನೆಂಬ ಸಂಗತಿಯನ್ನು ಬಿಟ್ಟು ಶಾಸನವು ಬೇರೆ ಯಾವ ಸಂಗತಿಯನ್ನೂ ಹೇಳಿರುವುದಿಲ್ಲ. ವಿಜಯನಗರದ ೧ನೆಯ ಬುಕ್ಕರಾಯ (ಕ್ರಿ. ಶ. ೧೩೫೬–೭೭) ಮತ್ತು ೨ನೆಯ ಹರಿಹರ (ಕ್ರಿ.ಶ.೧೩೭೭–೧೪೦೪) ಈ ದೊರೆಗಳ ಕಾಲದಲ್ಲಿ, ಮೊದಲಲ್ಲಿ ಮಹಾಪ್ರಧಾನನೂ ತರುವಾಯ ಬನವಾಸಿಯ ಪ್ರಾಂತಪಾಲನೂ ಆಗಿದ್ದು, 'ಮಾಧವಾಮಾತ್ಯ', 'ಮಾದರಸ ಒಡೆಯ' ಎಂದು ಮುಂತಾಗಿ ಕರೆಯಲ್ಪಟ್ಟಿದ್ದವನೇ ಈ 'ಮಾದರಸ ದಣ್ಣಾಯಕ' ಇರಬೇಕು. ಇವನು ತಪಸ್ವಿಯಂತಿದ್ದ ಚಾಉಂಡನ ಮಗನೆಂದೂ ವಿದ್ವಾಂಸನೂ ಕವಿಯೂ ರಾಜನೀತಿ ನ್ಯಾಯನಿಪುಣನೆಂದೂ ಪ್ರಸಿದ್ಧ ಶೈವಗುರುವಾದ ಕಾಶೀವಿಲಾಸಕ್ರಿಯಾಶಕ್ತಿಯ ಶಿಷ್ಯನೆಂದೂ ತಿಳಿದು ಬರುತ್ತದೆ. ಇವನು ಬಹುಶಃ ಕಡೆಯಲ್ಲಿ ಚಿತ್ರದುರ್ಗದ ಮಹಾಮಂಡಲೇಶ್ವರನಾಗಿ ನೇಮಕಗೊಂಡಿದ್ದನೆಂದು ತೋರುತ್ತದೆ.

ಅರವಟ್ಟಿಗೆಗೆ ನೀಡಲಾದ ಭೂಮಿ, ಪ್ರಸ್ತುತ ಶಾಸನದ ಕಲ್ಲು ನಿಂತಿರುವ ಭೂಮಿಯೇ ಎಂದು ಕಾಣುತ್ತದೆ. ದಾನ ನೀಡಲಾದ ಭೂಮಿ, ಕರಲಹಳ್ಳದ ಪೂರ್ವದ ದಂಡೆಯ ಮೇಲಿನ ಹೊಲ ಎಂದು ಶಾಸನ ತಿಳಿಸುತ್ತದೆ. ಈಗ ಶಾಸನ ಇರುವುದು ಹಳ್ಳದ ಪೂರ್ವದ ದಡದ ಹೊಲದಲ್ಲಿ. ಆದರೆ ಈಗ ಹಳ್ಳವನ್ನು ಉಪ್ಪುಹಳ್ಳ ಎಂದು ಕರೆಯುತ್ತಾರೆ. ದಾನದ ಭೂಮಿ ಎರಡು ಹಣ ಗುತ್ತಗೆಯ ತೆರ ಇದ್ದಂತಹ ಹಾಗೂ ನಾಗುಳ ಜೋಳದ ಬೀಜವರಿ ಇದ್ದಂತಹ ಭೂಮಿ ಎಂದು ಶಾಸನ ತಿಳಿಸುವುದರಿಂದ, ಅರವಟ್ಟಿಗೆಗೆ ಸಾಕಷ್ಟು ವಿಶಾಲವಾದ ಭೂಮಿಯೇ ದಾನವಾಗಿ ಕೊಡಲ್ಪಟ್ಟಿತ್ತೆಂಬುದನ್ನು ಅರಿಯಬಹುದಾಗಿದೆ.

ಮುಖ್ಯವಾಗಿ, ಚಿತ್ರದುರ್ಗದ ಪ್ರಾದೇಶಿಕ ಇತಿಹಾಸಕ್ಕೆ ಹಾಗೂ ಆನುಷಂಗಿಕವಾಗಿ ವಿಜಯನಗರ ಇತಿ

ಹಾಸಕ್ಕೆ ಕೆಲವು ಹೊಸ, ಕುತೂಹಲಕರ ಸಂಗತಿಗಳನ್ನು ಹೇಳುವುದರಿಂದ ಪ್ರಸ್ತುತ ಶಾಸನವು ಒಂದು ಗಮನಾರ್ಹ ಶಾಸನವೆಂದು ಭಾವಿಸಬಹುದು.

ಈ ಅನ್ವೇಷಣೆ/ಪರಿಶೋಧನೆಯಲ್ಲಿ ನೆರವು ನೀಡಿದ ಕಾಟಿಹಳ್ಳಿಯ ನೀಲವ್ವಳ ಮರುಳಸಿದ್ಧಪ್ಪ, ರುದ್ರಜ್ಜಿ ಮತ್ತು ಚಿತ್ರದುರ್ಗದ ಟಿ. ಎನ್. ಮಂಜಣ್ಣ ಇವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

## ಶಾಸನದ ಪಾಠ

೧. ನಮಸ್ತುಂಗ ಶಿರಶ್ಚುಂಬಿ

೨. ಚಂದ್ರಚಾಮರ ಚಾರವೇ ತ್ರಯಿಲೋಕ್ಯ ನ

೩. ಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ

೪. ಸಮಸ್ತ ಭುವನ ಭುವನಾಧೀಶ್ವರ ಪ್ರುಥಿವಿಗೆ

೫. ಮೂಲಸ್ತಾನವಾಗುತ್ತಂ ಇದಂಥಾ ಶ್ರೀಗಿರಿ ಮಲ್ಲಿಕಾ

೬. ರ್ಜುನದೇವರ ಧಿಬ್ಯಶ್ರೀಪಾದಪದ್ಮಾರಾದಕರುಮಪ್ಪ

೭. ಪರಿಣಾಮಿ ದೇವಯ್ಯಗಳು ಸಿದ್ದಾಪುರ ಹಡವ

೮. ನಹಳಿಯ ರಾಜ್ಯದಲ್ಲಿ ಉಭಯನಾನಾದೇಶಿಯ

೯. ಸಮಸ್ತ ಹ್ರಲರು ನಡವ ಮಾರ್ಗದಲ್ಲಿ ಅಜಿವಟ್ಟಿಗೆಯ

೧೦. ಲ್ಲಿ ಶಿವಾರ್ಥವಾಗಿ ಅಂಬಕುಳ ಶಿರ್ಧೋಶಧಿ ಧರ್ಮ್ಮ ನಡ

೧೧. ಉತ್ತಂ ಇರಲಾಗಿ ಚಿಂಮ್ಮತ್ತನಕಲ್ಲನಾಳುತ್ತಂ ಇದಂ

೧೨. ಥಾ ಮಾದರಸ ದಂಣಾಯಕರು ಆ ಧರ್ಮ್ಮವಂ ಕಂಡು

೧೩. ಪರಿಣಾಮಿಸಿ ಯಿಾ ಧರ್ಮ್ಮ ಅಚಂದಾರ್ಕಸ್ಥಾಯಿಯಾ

೧೪. ಗಿ ನಡೆಯಬೇಕೆಂದು ಆ ಕಜಿಲಹಳದ ಮೂಡ

೧೫. ಣ ದಡದಲ್ಲಿ ಎರಡುಹಣ ಗುತ್ತಗೆಯ ತೆಱವಿದ

೧೬. ಂಥಾ ನಾಗುಳ ಜೋಳದ ಬೀಜವರಿಯ ಕ್ಷೇತ್ರಕ್ಕೆ ನಾಲ್ಕು

೧೭. ಮೂಲೆಗಳಲ್ಲಿಉ ಲಿಂಗಮುದ್ರೆಯಕಲ್ಲನು ನೆಡಿಸಿ ಕೊಟ್ಟು

೧೮. ಶಾಶನವಂ ಬರಸಿ ಕೊಟಂಥಾ ದನದಾ ಕ್ಷೇತ್ರಕ್ಕೆ ಅರು

೧೯. ಅಂನ್ಯಾಯವ ಹುಟ್ಟಿಸಿ ಅಳೂಪಿದಂಥ ಅವರಿಗೆಉ

೨೦. ಭೂಮಿ ಮಾರ್ತಾಂಡನುಳಂನಬರ ಆನೇಕ ನಾಯಕದಲ್ಲಿಲು

೨೧. ಬೀಳುವರು ಚಾಂಡಾಲ ಯೋನಿಗಳಲಿಉ ಹುಟ್ಟುವರು ಕ್ರಿಮಿಕೀಟ.

೨೨. ಕ್ಷ ಜಂತುಗಳಾಗಿ ಆವೆ...ದಲ್ಲಿ ಹುಟ್ಟುತ್ತಂ ಯಿಹ

೨೩. ರು ಯಿಾ ಕ್ಷೇತ್ರವನು ಆ....ವವರು ನಾಲ್ಕುತಿಂಗಳ

೨೪. ಉಧಕವನೆ......ರು...ಹರು ಮಂಗಳ ಮ

೨೫. ಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ